

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ ಅರಳಿ<br>(ವಿಧಾನಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 171 |
| ಉತ್ತರಿಸುವ ದಿನಾಂಕ | 16.02.2022 |
| ಉತ್ತರಿಸುವ ಸಚಿವರು | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಅನು ಕ್ರಮ | ಪ್ರಶ್ನೆ | ಉತ್ತರ |
|---|---|---|
| ಅ | 2021-22ನೇ ಸಾಲಿನಲ್ಲಿ ನಗರ ಸಭೆ ವಸತಿ ಯೋಜನೆಗಳಾವುವು; ಪ್ರತ್ಯೇಕ ಯೋಜನೆಗಳಿಗೆ ಮೀಸಲಿಟ್ಟ ಅನುದಾನ ಎಷ್ಟು; ಭೌತಿಕ, ಆರ್ಥಿಕ ಅನುಷ್ಠಾನಗೊಳಿಸುವ ಮಾರ್ಗಸೂಚಿ ಯೋಜನೆ ವಾರು ಮಾಹಿತಿ ಒದಗಿಸುವುದು; | 2021-22ನೇ ಸಾಲಿನಲ್ಲಿ ಈ ಕೆಳಕಂಡ ನಗರ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ:-<br>1. ಡಾ: ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ನಗರ)<br>2. ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ)<br>3. ದೇವರಾಜ್ ಅರಸು ವಸತಿ ಯೋಜನೆ (ನಗರ)<br>4. ವಾಜಪೇಯಿ ವಸತಿ ಯೋಜನೆ (ನಗರ)<br>5. ಮಾನ್ಯ ಮುಖ್ಯ ಮಂತ್ರಿಯವರ ಒಂದು ಲಕ್ಷ ಬಹುಮಹಡಿ ಬೆಂಗಳೂರು ವಸತಿ ಯೋಜನೆ.<br>ವಿವಿಧ ವಸತಿ ಯೋಜನೆಗಳಿಗೆ ಆಯವ್ಯಯದಡಿ ಒದಗಿಸಲಾದ ಅನುದಾನದ ವಿವರಗಳು ಈ ಕೆಳಕಂಡಂತಿವೆ:-<br>**ಯೋಜನೆ** — **ಒದಗಿಸಲಾದ ಅನುದಾನ (ರೂ. ಕೋಟಿಗಳಲ್ಲಿ)**<br>ಡಾ: ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ* — 500.00<br>ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) — 527.73<br>ದೇವರಾಜ್ ಅರಸು ವಸತಿ ಯೋಜನೆ* — 50.00<br>ವಾಜಪೇಯಿ ವಸತಿ ಯೋಜನೆ (ನಗರ) — 250.00<br>**ಒಟ್ಟು :** — **1327.73**<br>*ಈ ಯೋಜನೆಗಳಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕ ಅನುದಾನ ಬಿಡುಗಡೆಯಾಗುವುದಿಲ್ಲ.<br>2021-22ನೇ ಸಾಲಿನಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ನಗರ) ಮತ್ತು ವಾಜಪೇಯಿ ನಗರ ವಸತಿ ಯೋಜನೆಯಡಿ ಸರ್ಕಾರದ ಆದೇಶ ಸಂಖ್ಯೆ: ವಇ 44 ಹೆಚ್‌ಎಹೆಚ್ 2021 (ಭಾಗ-2), ದಿನಾಂಕ: 31.12.2021 ರಲ್ಲಿ ನಗರ ಸ್ಥಳೀಯ ಸಂಸ್ಥೆವಾರು ಗುರಿ ಹಂಚಿಕೆ ಮಾಡಿ ಆದೇಶಿಸಲಾಗಿದೆ. |

ಯೋಜನಾವಾರು ವಿವರಗಳು ಕೆಳಕಂಡಂತಿವೆ:-

| ನಗರ ಸ್ಥಳೀಯ ಸಂಸ್ಥೆ ವಿವರ | ಗುರಿ | ಒಟ್ಟು ನಗರ ಸ್ಥಳೀಯ ಸಂಸ್ಥೆಗಳು | ಒಟ್ಟು ಗುರಿ | ಡಾ: ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ನಗರ) | ವಾಜಪೇಯಿ ನಗರ ವಸತಿ ಯೋಜನೆ |
|---|---|---|---|---|---|
| ಮಹಾನಗರ ಪಾಲಿಕೆ | 300 | 10 | 3000 | 720 | 2280 |
| ನಗರಸಭೆ | 100 | 61 | 6100 | 1464 | 4636 |
| ಪುರಸಭೆ | 75 | 121 | 9075 | 2178 | 6897 |
| ಪಟ್ಟಣ ಪಂಚಾಯಿತಿ | 50 | 118 | 5900 | 1416 | 4484 |
| **ಒಟ್ಟು:** | | **310** | **24075** | **5778** | **18297** |

ಆ ನಗರ ಸಭೆ G+3 ವಸತಿ ಯೋಜನೆ ಬಿಡುಗಡೆಯಾಗಿರುವ ಭೌತಿಕ ಆರ್ಥಿಕ ಅನುದಾನ ಎಷ್ಟು ಹಾಗೂ ಅನುಷ್ಠಾನಗೊಳಿಸುವ ಮಾರ್ಗಸೂಚಿಯ ಈ ಯೋಜನೆ ಯಾವ ಹಂತದಲ್ಲಿದೆ;

ಬೀದರ್ ನಗರಸಭೆಯಲ್ಲಿ G+3 ಮಾದರಿಯಲ್ಲಿ ಈ ಕೆಳಕಂಡ ಯೋಜನೆಗಳು ಅನುಷ್ಠಾನಗೊಳ್ಳುತ್ತಿವೆ:-

| ನಗರದ ಹೆಸರು | ಅನುಮೋದನೆಗೊಂಡ ಮನೆಗಳ ಸಂಖ್ಯೆ |
|---|---|
| ಬೀದರ್ | 128 |
| ಬೀದರ್ | 2200 |

ಸದರಿ ಯೋಜನೆಗಳಿಗೆ ಪರಿಷ್ಕೃತ ಡಿ.ಪಿ.ಆರ್. ಸಿದ್ಧಪಡಿಸಲಾಗಿದ್ದು, ದಿನಾಂಕ: 17.12.2021 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ S.L.S.M.C. ಸಮಿತಿಯು ತನ್ನ 29ನೇ ಸಭೆಯಲ್ಲಿ ನೀಡಿದ ನಿರ್ದೇಶನದಂತೆ ಎಲ್ಲಾ ಫಲಾನುಭವಿಗಳ ಆಯ್ಕೆ ಹಾಗೂ ಪ್ರತಿ ಫಲಾನುಭವಿಯಿಂದ ರೂ. 10,000/- (ಹತ್ತು ಸಾವಿರ ರೂಪಾಯಿಗಳು) ಗಳ ಪ್ರಾರಂಭಿಕ ಠೇವಣಿ ಸಂಗ್ರಹಿಸಿದ ನಂತರ ಯೋಜನೆಯಡಿ ಟೆಂಡರ್ ಆಹ್ವಾನಿಸಿ ಅನುಷ್ಠಾನಗೊಳಿಸಬೇಕಾಗುತ್ತದೆ.

ಇದರಿಂದಾಗಿ, ಪ್ರಸ್ತುತ ಸದರಿ ಯೋಜನೆಗಾಗಿ ಅನುದಾನವನ್ನು ಬಿಡುಗಡೆಗೊಳಿಸಿರುವುದಿಲ್ಲ.

[ಸಂಖ್ಯೆ: ವಇ 24 ಹೆಚ್‌ಎಫ್‌ಎ 2021]

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು.